# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 654 |
| ಸದಸ್ಯರ ಹೆಸರು | : | ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 17-09-2021. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಜಮೀನಿನ ವಿಸ್ತೀರ್ಣವು 0.25 ಎಕರೆ (1000 ಚ.ಮೀ. ಅಥವಾ ಅದಕ್ಕಿಂತ ಕಡಿಮೆ ವಿಸ್ತೀರ್ಣದ ಜಮೀನುಗಳಿಗೆ ಸ್ಥಳೀಯ ಯೋಜನಾ ಪ್ರಾಧಿಕಾರಗಳಿಂದ ಬಹು ನಿವೇಶನ ಬಡಾವಣೆ ನಕ್ಷೆ ಅನುಮೋದನೆ ಸಂದರ್ಭದಲ್ಲಿ 5% ವಿಸ್ತೀರ್ಣದ ಜಮೀನನ್ನು ಆಟದ ಮೈದಾನಕ್ಕಾಗಿ ಹಾಗೂ ಭಾಗವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸುತ್ತಿರುವುದು ನಿಜವೇ; | ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 132 ಗ್ರಾಪಂಅ 2015 ದಿನಾಂಕ:19-03-2015 ರಲ್ಲಿ ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಜಮೀನಿನ ವಿಸ್ತೀರ್ಣವು 1000 ಚ.ಮೀ. (0.10 ಹೆಕ್ಟೇರ್ಸ್) ಅಥವಾ ಕಡಿಮೆ ಇದ್ದಲ್ಲಿ ಏಕನಿವೇಶನ ವಸತಿ / ವಸತಿಯೇತರರಿಗಾಗಿ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಯನ್ನು ಗ್ರಾಮ ಪಂಚಾಯತಿಗಳು ಮಾಡಲು ಅಧಿಕಾರ ನೀಡಿದೆ.<br><br>ಜಮೀನಿನ ವಿಸ್ತೀರ್ಣವು 1000 ಚ.ಮೀ. (0.10 ಹೆಕ್ಟೇರ್ಸ್) ಅಥವಾ ಕಡಿಮೆ ಇದ್ದಲ್ಲಿ ಮಾತ್ರ ಗ್ರಾಮ ಪಂಚಾಯತಿಯು ಉದ್ಯಾನವನ, ಆಟದ ಮೈದಾನ ಹಾಗೂ ಬೈಲು ಜಾಗಕ್ಕಾಗಿ ಕಾಯ್ದಿರಿಸುವ ಅಗತ್ಯ ಇರುವುದಿಲ್ಲ. |
| (ಆ) | ಹಾಗಿದ್ದಲ್ಲಿ, ಕಾಯ್ದಿರಿಸಿದ ಜಾಗದ ಉದ್ದೇಶವನ್ನು ಈಡೇರಿಸಲು ಸಾಧ್ಯವೇ; | ಅನ್ವಯಿಸುವುದಿಲ್ಲ. |
| (ಇ) | ಭೂ ನಿವೇಶನ ವಿನ್ಯಾಸ ನಕ್ಷೆ ಮಂಜೂರಾತಿಯಲ್ಲಿ 0.01 ಎಕರೆ/0.02 ಎಕರೆ ಜಾಗವನ್ನು ಸಾರ್ವಜನಿಕ ಉಪಯೋಗಕ್ಕಾಗಿ ಸಣ್ಣ ಪ್ರಮಾಣದ ಜಾಗವನ್ನು ಕಾಯ್ದಿರಿಸಿರುವುದರಿಂದ ಪ್ರಯೋಜನವಾಗುವುದೇ; | ಅನ್ವಯಿಸುವುದಿಲ್ಲ. |
| (ಈ) | ಸಾರ್ವಜನಿಕ ಉಪಯೋಗಕ್ಕಾಗಿ ಇಷ್ಟು ಸಣ್ಣ ಪ್ರಮಾಣದ ಜಾಗವನ್ನು ಯಾವ ರೀತಿ ಸದುಪಯೋಗ ಪಡಿಸಿಕೊಳ್ಳಲು ಉದ್ದೇಶಿಸಲಾಗಿರುತ್ತದೆ? | ಅನ್ವಯಿಸುವುದಿಲ್ಲ. |

ಸಂ. ಗ್ರಾಅಪ 327 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.